# ಸಮಾಜ ವಿಜ್ಞಾನ ತರಗತಿಯಲ್ಲಿ ಪರಾನುಭೂತಿಯ ರುಚಿ

- **ಪ್ರಕಾಶ್ ಚಂದ್ರ ಗೌತಮ್**

ಹಿರಿಯ ಪ್ರಾಥಮಿಕ ತರಗತಿಗಳಲ್ಲಿ ಸಮಾಜ ವಿಜ್ಞಾನ ಬೋಧನೆಗೆ ತನ್ನದೇ ಆದ ಅನನ್ಯತೆಯಿದೆ. ಏಕೆಂದರೆ ಈ ಹಂತದಲ್ಲಿ ಕಲಿಕಾರ್ಥಿಗಳು ತಮ್ಮ ಸುತ್ತಲಿನ ಸಮುದಾಯದ ಮೂಲಕ, ಮನೆಗಳಲ್ಲಿ ಸೂಕ್ಷ್ಮವಾಗಿ ಅವಲೋಕಿಸುವುದರ ಮೂಲಕ, ವೃತ್ತಪತ್ರಿಕೆಗಳು, ಮಾಧ್ಯಮಗಳು ಮುಂತಾದವುಗಳ ಮೂಲಕ ಮಾನವ ಸಮಾಜದಲ್ಲಿನ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳಬಲ್ಲರು. ಶಿಕ್ಷಕರಿಗೂ ಸಹಿತ ಸಮುದಾಯದಿಂದ ಇದೇ ಬಗೆಯ ಅನುಭವಗಳು ದೊರಕುತ್ತವೆ. ಆದರೆ ವಯಸ್ಕರ ಮತ್ತು ಮಕ್ಕಳ ಅನುಭವಗಳ ನಡುವೆ ದೊಡ್ಡದೊಂದು ವ್ಯತ್ಯಾಸವಿದೆ: ಮಕ್ಕಳು ತಮ್ಮ ಸುತ್ತಲಿನ ಸಂಗತಿಗಳನ್ನು ಸೂಕ್ಷ್ಮವಾಗಿ ಗಮನಿಸಿ ಸಾಮಾಜಿಕ ಸಮಸ್ಯೆಗಳು, ಸತ್ಯ ಸಂಗತಿಗಳು, ಘಟನೆಗಳ ಬಗ್ಗೆ ನಿರಂತರವಾದ ವಿಚಾರಮಂಥನದ ಅನಂತರ ತಮ್ಮ ಅಭಿಪ್ರಾಯಗಳನ್ನು ರೂಪಿಸಿಕೊಂಡರೆ ವಯಸ್ಕರು ವ್ಯಾಪಕವಾದ ಅನುಭವವಿದ್ದರೂ ಏಕೋ ಏನೋ ಸಮಸ್ಯೆ, ಸತ್ಯ ಸಂಗತಿಗಳ ಬಗ್ಗೆ ರೂಢಮತಿಗಳಾಗಿರುತ್ತಾರೆ. ಹೀಗಾಗಿ ಹೆಚ್ಚಿನ ಸಾಮಾಜಿಕ ಸಂಗತಿಗಳು ವಯಸ್ಕರನ್ನು ಚಕಿತಗೊಳಿಸುವುದಿಲ್ಲ.

ಒಂದು ಮಗು, ವಿಶೇಷವಾಗಿ ಹನ್ನೆರಡು ಅಥವಾ ಹದಿಮೂರು ವರ್ಷ ವಯಸ್ಸಿನದು, ಮೊದಲ ಬಾರಿಗೆ ಸಾಮಾಜಿಕ ಅನಿಷ್ಟವೊಂದನ್ನು ಎದುರಾಗುವ ಸನ್ನಿವೇಶವನ್ನು ಕಲ್ಪಿಸಿಕೊಳ್ಳೋಣ. ನಾನು ಸಾಮಾನ್ಯವಾಗಿ ನನ್ನ ಶಾಲೆಯಲ್ಲಿ ಅಂತಹ ಸಮಾಜವಿಜ್ಞಾನ ಕಲಿಕಾರ್ಥಿಗಳನ್ನು ಭೇಟಿಯಾಗುತ್ತೇನೆ. ಅವರು ನನಗೆ ಈ ಕೆಳಗಿನ ಬಗೆಯ ಪ್ರಶ್ನೆಗಳನ್ನು ಕೇಳಿದಾಗ ಅವರೊಂದಿಗೆ ನಾನು ನನ್ನ ಅತ್ಯಂತ ಸಂತೋಷದ ಸಮಯವನ್ನು ಕಳೆಯುತ್ತೇನೆ.

- ನಮ್ಮ ಸುತ್ತಲಿನ ಗೋಡೆಗಳ ಮೇಲೆ ಎಲ್ಲೆಡೆ'ಹೆಣ್ಣುಮಕ್ಕಳನ್ನು ಉಳಿಸಿ' ಎಂಬಂತಹ ಕೆಲವು ಘೋಷಣೆಗಳನ್ನು ಏಕೆ ಬರೆಯಲಾಗಿದೆ?
- ಯಾಕೆ ಹುಡುಗರಿಗಾಗಿ ಅಂತಹ ಘೋಷಣೆಗಳು ಬರೆಯಲ್ಪಟ್ಟಿಲ್ಲ?
- ಯಾಕೆ ನಮ್ಮ ತಾಯಂದಿರು ಮಾತ್ರವೇ ಮನೆಗೆಲಸದಲ್ಲಿ ನಿರತರಾಗಿರುತ್ತಾರೆ?
- ಯಾಕೆ ಕುಟುಂಬದ ಮಹಿಳಾ ಸದಸ್ಯರಿಗೆ ಮುಂಜಾನೆಯಿಂದ ರಾತ್ರಿಯವರೆಗೂ ಕಾರ್ಯಭಾರವಿರುತ್ತದೆ?
- ಪಾತ್ರೆ ತೊಳೆಯುವುದು ಮತ್ತು ಮನೆಗೆಲಸ ಇಂತಹ ಕೆಲವು ಕೆಲಸಗಳನ್ನು ಯಾಕೆ ಮಹಿಳಾ ಸದಸ್ಯರಷ್ಟೇ ಮಾಡುತ್ತಾರೆ?

ಯಾವ ಶಿಕ್ಷಕರಿಗೇ ಆದರೂ ಕಲಿಕಾರ್ಥಿಯು ತನ್ನ ಸುತ್ತಲಿನ ಸಮುದಾಯದ ವಿಷಯಗಳಲ್ಲಿ ತೊಡಗಿಸಿಕೊಳ್ಳುವುದು ಮುಖ್ಯವಾದದ್ದಾಗಿದೆ.

ಅವರು ಜಗತ್ತನ್ನು ನೋಡುವ ಕ್ರಮವು ಸಾಮಾನ್ಯವಾಗಿ ತರಗತಿಯ ಪ್ರಕ್ರಿಯೆಯ ಹೊತ್ತಿನಲ್ಲಿ ಪ್ರಶ್ನೆಗಳು, ಮಾತುಕತೆಗಳು ಮತ್ತು ಚಿಂತನೆಗಳ ಮೂಲಕ ಬರುತ್ತದೆ.

ನನ್ನ ಕಳೆದ ವರ್ಷದ ತರಗತಿಯ ಕಲಿಕೆಯ ಕೆಲವು ಅನುಭವ'ಚಿತ್ರಗಳನ್ನು' ಇಲ್ಲಿ ಹಂಚಿಕೊಳ್ಳುತ್ತಿದ್ದೇನೆ. ನಾನಾಗ ನನ್ನ ತರಗತಿಗಾಗಿ ಯೋಜನೆ ಹಾಕುತ್ತಿದ್ದೆ.'ಆರು ಮತ್ತು ಹನ್ನೆರಡನೇ ಶತಮಾನಗಳ ನಡುವಿನ ಸಾಮಾಜಿಕ ಬದಲಾವಣೆಗಳು' ಎಂಬುದು ಕಲಿಕೆಯ ವಿಷಯವಾಗಿತ್ತು. ತರಗತಿಯು ನಡೆಯುತ್ತಿದ್ದ ಸಂಪೂರ್ಣ ಅವಧಿಯಲ್ಲಿ ಮಕ್ಕಳು ಆಗಾಗ ಪ್ರಶ್ನೆಗಳನ್ನು ಕೇಳುತ್ತಿದ್ದರು ಮತ್ತು ನಾವು ನಿಕಟ ಸ್ನೇಹಿತರಾಗಿದ್ದೆವು. ಪ್ರಾಜೆಕ್ಟ್ ಕೆಲಸವನ್ನು ನಿಯೋಜಿಸುವ ಹಂತದಲ್ಲಿ ನಾನು ನನ್ನ ನಿಯೋಜನಾ ಯೋಜನೆಯಲ್ಲಿ ಅವರ ಪ್ರಶ್ನೆಗಳನ್ನು ಹೆಣೆಯಲು ಪ್ರಯತ್ನಿಸುತ್ತಿದ್ದೆ. ಈ ಪ್ರಕ್ರಿಯೆಯಲ್ಲಿ ಏಳನೇ ತರಗತಿಯ ಹದಿಮೂರು ಅಥವಾ ಹದಿನಾಲ್ಕು ವರ್ಷ ವಯೋಮಾನದ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕ್ರಿಯೆಯಲ್ಲಿ ಪೂರ್ತಿ ಮುಳುಗಿಹೋಗಿದ್ದೆ. ನನ್ನ ಸಿದ್ಧತೆಯ ಬಗ್ಗೆ ನಾನು ತುಂಬ ಉತ್ಸುಕನಾಗಿದ್ದೆ. ಸಮಾಜವಿಜ್ಞಾನದಂತಹ ವಿಷಯಗಳು ವಿಶಾಲವಾದ ಚಾಚು ಮೂಲೆಗಳನ್ನು ಹೊಂದಿವೆಯಲ್ಲದೇ ಅಮಿತ ಚರ್ಚೆಗಳು ಮತ್ತು ವಾಗ್ವಾದಗಳಿಗೆ ಅವಕಾಶ ನೀಡುತ್ತವೆ. ಪುಸ್ತಕಗಳು ಯಾವುದೇ ಇದ್ದರೂ ಮಕ್ಕಳು ತಮ್ಮದೇ ಆದ ವ್ಯಾಖ್ಯಾನವನ್ನು ರೂಪಿಸಿಕೊಳ್ಳಬಹುದಾದ ವೇದಿಕೆಯನ್ನು ನಿರ್ಮಿಸಿಕೊಳ್ಳಲು, ಸೃಷ್ಟಿಶೀಲರಾಗಲು, ಅನುಭವಿಸಲು ಇಲ್ಲಿ ಅವಕಾಶವಿದೆ.

ಇಂತಹ ಎಲ್ಲ ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಏಳನೆಯ ತರಗತಿಯ ಕಲಿಕಾರ್ಥಿಗಳಿಗೆ ಪ್ರಾಜೆಕ್ಟ್ ಕೆಲಸವನ್ನು ವಿನ್ಯಾಸಗೊಳಿಸಿದ್ದೆ. ನಮ್ಮ ತರಗತಿಯಲ್ಲಿ 30 ಕಲಿಕಾರ್ಥಿಗಳಿದ್ದರು. ಅವರನ್ನು ಆರು ಉಪಗುಂಪುಗಳಾಗಿ ವಿನ್ಯಾಸಗೊಳಿಸಿದ್ದೆ. ಅವರಿಗೆ ನೀಡಿದ ವಿಷಯವು ಪ್ರಸ್ತುತವಾದುದಾಗಿತ್ತು. ಮಧ್ಯಕಾಲೀನ ಸಮಾಜ ಮತ್ತು ಪದ್ಧತಿಗಳ ಸಂಕೀರ್ಣತೆ ಮಕ್ಕಳಿಗೆ ಪರಿಚಯವೇ ಆಗಿತ್ತು. ಆದುದರಿಂದ ಹನ್ನೆರಡನೇ ಶತಮಾನದವರೆಗಿನ ಅವಧಿಯಲ್ಲಿ ಮತ್ತು ಆಧುನಿಕ ಯುಗದಲ್ಲಿ ಮಹಿಳೆಯರ ಸ್ಥಿತಿಗತಿಯ ತುಲನಾತ್ಮಕ ಅಧ್ಯಯನದೊಂದಿಗೆ ನಾವು ಕಾರ್ಯವನ್ನು ಆರಂಭಿಸಿದೆವು. ನಾವು ನಿಗದಿತ ಪಠ್ಯ ಪುಸ್ತಕಗಳು, ಮಧ್ಯಕಾಲೀನ ಇತಿಹಾಸದ ಪುಸ್ತಕಗಳು, ಗ್ರಂಥಾಲಯ ಮತ್ತು ವೃತ್ತಪತ್ರಿಕೆಗಳನ್ನು ಆಯ್ಕೆ ಮಾಡಿಕೊಂಡಿದ್ದೆವು. ನಮ್ಮಲ್ಲಿ ಇತರ ಶಿಕ್ಷಕರು ಇಲ್ಲವೇ ಶಾಲಾ ತಪಾಸಣಾಧಿಕಾರಿಗಳು, ಪಾಲಕರು ಮುಂತಾಗಿ ಸಂಪನ್ಮೂಲ ವ್ಯಕ್ತಿಗಳೂ ಸಹ ಇದ್ದರು. ನಮ್ಮ ಸಂಪನ್ಮೂಲ ವಲಯಗಳನ್ನು ವಿಸ್ತರಿಸಿಕೊಳ್ಳುವ ಯೋಜನೆಯನ್ನು ನಾವು ಹಾಕಿಕೊಂಡಿದ್ದೆವು.

ಪ್ರಾಜೆಕ್ಟ್ ಗಳು ಪೂರ್ಣಗೊಳ್ಳಲು ಏಳು ದಿನಗಳು ಬೇಕಾದವು. ಕಲಿಕಾರ್ಥಿಗಳು ನಮ್ಮ ಎಂದಿನ ತರಗತಿ ಅವಧಿಯ ಆಚೆಯೂ ಕೆಲಸ

ಮಾಡುತ್ತಿದ್ದರು, ಆಮೇಲೆ ಅವರು ಕೆಲವು ತೀರ್ಮಾನಗಳಿಗೆ ಬಂದರು. ಅವರಲ್ಲಿ ಅಭಿಪ್ರಾಯ ಭೇದವಿತ್ತು ಎನ್ನುವುದು ನಮಗೆ ತುಂಬ ಸಂತೋಷ ನೀಡಿತು. ಇಲ್ಲಿ ಕೆಲವು ಚರ್ಚೆಗಳಿವೆ:

| | | |
|---|---|---|
| ಶಿಕ್ಷಕಿ | : | ನಮ್ಮ ಪಠ್ಯಪುಸ್ತಕಗಳಲ್ಲಿ ಬಳಕೆಯಾಗಿರುವ ಕೆಲವು ಪದಗಳು / ಪರಿಭಾಷೆಗಳ ಬಗ್ಗೆ ಸ್ಪಷ್ಟತೆ ಪಡೆಯುವುದರೊಂದಿಗೆ ನಾವು ತರಗತಿಯನ್ನು ಪ್ರಾರಂಭಿಸೋಣವೇ? |
| ಕಲಿಕಾರ್ಥಿಗಳು | : | ಸರಿ! |
| ಶಿಕ್ಷಕಿ | : | ಹಾಗಾದರೆ ನನಗೆ ಕೆಲವು ಉದಾಹರಣೆಗಳನ್ನು ನೀಡಿ! |
| ಕಲಿಕಾರ್ಥಿಗಳು | : | ಸತಿ ಪದ್ಧತಿ, ಪರ್ದಾ ಪದ್ಧತಿ, ಬಾಲ್ಯ ವಿವಾಹ, ಶಿಕ್ಷಣದಿಂದ ವಂಚಿತರಾಗುವುದು ಇತ್ಯಾದಿ. |
| ಶಿಕ್ಷಕಿ | : | ಸತಿ ಪದ್ಧತಿಯ ಬಗ್ಗೆ ನೀವೇನು ತಿಳಿದಿದ್ದೀರಿ ಎನ್ನುವುದನ್ನು ಯಾರಾದರೂ ವಿವರಿಸುವಿರಾ? |
| ಮಕ್ಕಳ ಒಂದು ಗುಂಪು | : | ಜೀವಂತ ಮಹಿಳೆಯರನ್ನು ಮೃತಪಟ್ಟ ಅವರ ಗಂಡನ ಚಿತೆಗೆ ಬಲವಂತವಾಗಿ ನೂಕುವ ಸಂಪ್ರದಾಯ. |
| ಶಿಕ್ಷಕಿ | : | ಈ ಸಮಯದಲ್ಲಿ ಆ ಮಹಿಳೆ ಅನುಭವಿಸುವ ನೋವನ್ನು ನಾವು ಊಹಿಸಬಹುದೇ? ಅದರ ಬಗ್ಗೆ ಮಾತನಾಡುವಷ್ಟು ಸರಳವಾಗಿದ್ದಿರಬಹುದೇ ಅದು? |
| ಒಂದು ಗುಂಪು | : | ಇಲ್ಲ. ಅದು ನಿಜಕ್ಕೂ ಇಡೀ ಕುಟುಂಬ ಮತ್ತು ಹಳ್ಳಿಗೆ ಕಠಿಣ ಸಮಯವಾಗಿತ್ತು. ಅದಲ್ಲದೇ, ಅವರ ಮಕ್ಕಳ ಗತಿ ಏನು? ನಾವು ಅವರ ಬಗ್ಗೆ ತಿಳಿದೇ ಇಲ್ಲ. |

> ವಯಸ್ಕರಾಗಿ ನಾವು ವಿಷಯಗಳು ಮತ್ತು ನಿರ್ದಿಷ್ಟಾಂಶಗಳನ್ನು ಗಮನಿಸಿ ಸ್ಪಂದಿಸುತ್ತೇವೆ. ಆದರೆ ಮಕ್ಕಳು ಭಾವನೆಗಳ ಮೇಲೆ ಲಕ್ಷ್ಯವನ್ನು ಕೇಂದ್ರೀಕರಿಸುತ್ತಾರೆ. ಅವರು ಅವಿಭಕ್ತ ಕುಟುಂಬಗಳ ಭಾಗವಾಗಿರುವುದರಿಂದ ಮತ್ತು ಗ್ರಾಮೀಣ ಸಮುದಾಯಗಳಲ್ಲಿ ಭಾವನೆಗಳು ಸಂದರ್ಭೋಚಿತ ಸಂಪತ್ತಾಗಿರುವುದರಿಂದ ಅವರು ಘಟನೆಗಳ ಹಿಂದಿನ ಕ್ರೌರ್ಯವನ್ನು ಗಮನಿಸುತ್ತಾರೆ ಮತ್ತು ಅದರಿಂದ ವಿಷಾದಗೊಳ್ಳುತ್ತಾರೆ.

ವಯಸ್ಕರಾಗಿ ನಾವು ವಿಷಯಗಳು ಮತ್ತು ನಿರ್ದಿಷ್ಟ ಅಂಶಗಳ ಮೇಲೆ ಕೇಂದ್ರೀಕರಿಸಿದರೆ ಮಕ್ಕಳು ಭಾವನಾತ್ಮಕವಾಗಿ ಸ್ಪಂದಿಸುತ್ತಾರೆ. ಅವಿಭಕ್ತ ಕುಟುಂಬದಲ್ಲಿರುವ ಅವರು ಕ್ರೂರವಾಗಿ ದಹಿಸಲ್ಪಟ್ಟ ಈ ತಾಯಂದಿರ ಮಕ್ಕಳ ಗತಿ ಏನೆಂದು ಕೇಳಿದರು. ಗ್ರಾಮೀಣ ಸಮುದಾಯಗಳಲ್ಲಿ ಭಾವನೆಗಳು

ಸಂದರ್ಭೋಚಿತ ಸಂಪತ್ತು. ದುರದೃಷ್ಟವಶಾತ್ ಮಹಾನಗರಗಳಲ್ಲಿನ ಮಕ್ಕಳು ಇದರಿಂದ ವಂಚಿತರಾಗಿದ್ದಾರೆ.

| | | |
|---|---|---|
| ಇನ್ನೊಂದು ಗುಂಪು | : | ಒಮ್ಮೆ ನನ್ನ ಬೆರಳು ಮೇಣದಬತ್ತಿಯ ಜ್ವಾಲೆ ತಾಗಿ ಸುಟ್ಟಿತ್ತು. ಅದು ಗುಣವಾಗಲು ವಾರಗಳೇ ಬೇಕಾದವು. ನಾನು ಆ ಬಗೆಯ ನೋವನ್ನು ಊಹಿಸಬಲ್ಲೆ. |
| ಶಿಕ್ಷಕಿ | : | ಓಹ್! ಸಂಪ್ರದಾಯದ ಹೆಸರಿನಲ್ಲಿ ಸುಟ್ಟುಹೋದ ಮಹಿಳೆಯರ ಬಗ್ಗೆ ನಿಮ್ಮ ಅಭಿಪ್ರಾಯವೇನು? ಅವರು ಅದನ್ನು ಮನಸಾ ಒಪ್ಪಿಕೊಂಡಿದ್ದರೇ? |
| ಕಲಿಕಾರ್ಥಿಗಳು | : | ಬಹುಶಃ ಇಲ್ಲ... |
| ಶಿಕ್ಷಕಿ | : | ನೀವು ಶೋಧಿಸಿರುವುದನ್ನು ನಾವೀಗ ಚರ್ಚಿಸೋಣ. ಭೂತಕಾಲದ ಮತ್ತು ವರ್ತಮಾನದ ನಡುವಿನ ಕೆಲವು ಸಾಮ್ಯಗಳನ್ನು ನೀವು ಹೇಳಬಲ್ಲಿರಾ? |
| ಒಂದು ಗುಂಪು | : | ನಾವು ಒಂದು ಗುಂಪಾಗಿ ತೀರ್ಮಾನಿಸಿರುವುದೇನೆಂದರೆ ಆಧುನಿಕ ಕಾಲದಲ್ಲೂ ಕೆಟ್ಟದಾದ ಅಥವಾ ಅದಕ್ಕಿಂತ ಕೀಳಾದ ಪದ್ಧತಿಗಳಿವೆ. |
| ಶಿಕ್ಷಕಿ | : | ಹೇಗೆ? |
| ಗುಂಪು | : | ಹೆಣ್ಣು ಭ್ರೂಣಗಳನ್ನು ಹತ್ಯೆ ಮಾಡಲಾಗುತ್ತಿದೆ ಎಂದು ಸ್ಪಷ್ಟವಾಗಿ ತೋರಿಸುವ ಸಾಕಷ್ಟು ವೃತ್ತಪತ್ರಿಕೆಯ ತುಣುಕುಗಳು ನಮ್ಮಲ್ಲಿವೆ. ಅವು ಸ್ತ್ರೀ ಭ್ರೂಣಹತ್ಯೆಗೆ ಪುರಾವೆಗಳಾಗಿವೆ. |
| ಶಿಕ್ಷಕಿ | : | ಹೌದು ಅದನ್ನು ಮಾಡಲಾಗುತ್ತಿದೆ. ಅದನ್ನು ಓದುವುದು ದುಃಖದ ಸಂಗತಿ. |
| ಕಲಿಕಾರ್ಥಿಗಳು | : | ಸ್ತ್ರೀ ಭ್ರೂಣಹತ್ಯೆ, ಮಕ್ಕಳ ದುರುಪಯೋಗ, ಲೈಂಗಿಕ ಕಿರುಕುಳ ಇಂತಹ ಇತರ ಅನಿಷ್ಟಗಳು ಇನ್ನೂ ಅಸ್ತಿತ್ವದಲ್ಲಿವೆ. ಅಂದರೆ ನಾವು ಮಧ್ಯಕಾಲೀನ ಯುಗದಿಂದ ಭಿನ್ನರಾಗಿಲ್ಲ. ಮಹಿಳೆಯರು ಮತ್ತು ಹುಡುಗಿಯರು ಇನ್ನೂ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿದ್ದಾರೆ. |
| ಶಿಕ್ಷಕಿ | : | ದುರದೃಷ್ಟವಶಾತ್ ಇದು ನಮ್ಮ ವಾಸ್ತವ. ಆದರೆ ನಾವು ಹಳೆಯ ಪದ್ಧತಿಗಳಿಂದ ಮೈಲುಗಟ್ಟಲೆ ಮುಂದೆ ನಡೆದಿದ್ದೇವೆ. |
| ಕಲಿಕಾರ್ಥಿಗಳು | : | ಆದರೆ ನಮ್ಮ ಅಭಿಪ್ರಾಯ ಭಿನ್ನವಾಗಿದೆ. |
| ಶಿಕ್ಷಕಿ | : | ಸರಿ, ಅದನ್ನು ವಿವರಿಸುತ್ತೀರ? ಶಿಕ್ಷಣ, ಬಡತನ ನಿರ್ಮೂಲನೆ, ತಂತ್ರಜ್ಞಾನ ಇತ್ಯಾದಿಗಳಲ್ಲಿ ನಾವು |

ಸಾಕಷ್ಟು ದೂರ ಕ್ರಮಿಸಿದ್ದೇವೆ ಎಂದು ನಾನು ನಂಬುತ್ತೇನೆ.

> ಮಕ್ಕಳು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದಾಗ, ಯೋಚಿಸಲು ನಿಂತಾಗ, ಮಾತನಾಡಲು ಚರ್ಚಿಸಲು ತೊಡಗಿದಾಗ ಶಿಕ್ಷಕರು ಉತ್ಸುಕರಾಗುತ್ತಾರೆ. ಏಕೆಂದರೆ ಆಗಲೇ ನಾವು ನಮ್ಮ ಅಭಿಪ್ರಾಯಗಳೊಂದಿಗೆ ಜಗತ್ತನ್ನು ಎದುರಿಸಲು ಸಾಧ್ಯವಾಗುತ್ತದೆ.

ಮಕ್ಕಳು ತಮ್ಮದೇ ಆದ ಅಭಿಪ್ರಾಯಗಳನ್ನು ಹೊಂದಿದ್ದಾಗ, ಅವರು ಆಲೋಚಿಸಲು ತೊಡಗಿದಾಗ ಶಿಕ್ಷಕರಾಗಿ ನಾವು ಹಿಗ್ಗುತ್ತೇವೆ. ಒಂದಷ್ಟು ಓದು ಮತ್ತು ಚರ್ಚೆಯ ಅನಂತರ ನಾವು ನಮ್ಮದೇ ಆದ ದೃಷ್ಟಿಕೋನಗಳೊಂದಿಗೆ ಸಾಮಾಜಿಕ ಪ್ರಪಂಚದ ಹಾದಿಯಲ್ಲಿ ಮುನ್ನಡೆದೆವು.

**ವಿದ್ಯಾರ್ಥಿಗಳು ಚರ್ಚಿಸಿದ ಮತ್ತು ಪಟ್ಟಿಯಲ್ಲಿ ಹೋಲಿಸಿ ಬರೆದ ಕೆಲವು ಟಿಪ್ಪಣಿಗಳನ್ನು ಕೆಳಗೆ ನೀಡಲಾಗಿದೆ:**

ಮತ್ತೊಂದು ಕುತೂಹಲಕಾರಿ ಮುಂಬರಿಕೆಯೆಂದರೆ ಮುಕ್ತ ಅಂತ್ಯದ ಪ್ರತಿಕ್ರಿಯೆಗಳು. ಇವು ಮೇಲ್ನೋಟಕ್ಕೆ ಒಂದೇ ಬಗೆಯವಾಗಿ ಕಾಣುತ್ತವೆ. ಆದರೆ ಇವು ಹಿಂದಿನ ಚರ್ಚಾ ಶೀರ್ಷಿಕೆಗೆ ಸಂಬಂಧಿಸಿಕೊಂಡಿರುವುದರಿಂದ ಪ್ರಾಜೆಕ್ಟನ್ನು ಅನುಕ್ರಮವಾಗಿಸುತ್ತವೆ. ಅದರ ಒಂದು ಭಾಗ ಇಲ್ಲಿದೆ:

ಪ್ರಶ್ನೆ: ನಿಮ್ಮ ದೃಷ್ಟಿಯಲ್ಲಿ ಮೂಲಭೂತ ಮಹಿಳಾ ಹಕ್ಕುಗಳು ಯಾವುವು?

ಅವರು ಜಂಟಿಯಾಗಿ ಚರ್ಚಿಸಿ ಬರೆದದ್ದು ಹೀಗೆ;

1. ಮುಕ್ತವಾಗಿ ಪ್ರಯಾಣಿಸುವ ಹಕ್ಕು.
2. ಕೆಲಸ ಮಾಡುವ ಹಕ್ಕು.
3. ಸ್ವಂತ ಆಯ್ಕೆಯ ವ್ಯಕ್ತಿಯನ್ನು ಮದುವೆಯಾಗುವ ಹಕ್ಕು.
4. ಮಹಿಳೆಯರ ಸಾಂಘಿಕ ಬದುಕು.
5. ಮಹಿಳೆಯರಿಗೆ ತಮ್ಮ ಸ್ವಾಭಿಮಾನವನ್ನು ಹೆಚ್ಚಿಸಿಕೊಳ್ಳುವ ಅವಕಾಶ.
6. ಮಹಿಳೆಯರನ್ನು ಕೊಲ್ಲುವ / ಸುಟ್ಟು ಹಾಕುವ ಅಧಿಕಾರ ಯಾರಿಗೂ ಇಲ್ಲ.

ಮೇಲೆ ಪಟ್ಟಿ ಮಾಡಿದ ಅಭಿಪ್ರಾಯಗಳು ವಿಶ್ಲೇಷಣೆ ಮತ್ತು ತಿಳಿವಳಿಕೆಯ ವಿನಿಮಯದಿಂದ ಬಂದವು. ನಾವು ಕಾಣಬಯಸುವ ವಿಸ್ತಾರವಾದ ಸಮಾಜದ ಒಂದು ಇಣುಕು ನೋಟವನ್ನು ಇವು ನೀಡುತ್ತವೆ. ಸಂವಾದ ಮತ್ತು ಚರ್ಚೆಗಳ ಮೂಲಕವೇ ನಂಬಿಕೆ ಬೆಳೆಯುತ್ತದೆ ಮತ್ತು ಅದು ಸಮಾಜ ವಿಜ್ಞಾನ ಬೋಧನೆಯ ಒಂದು ಅವಶ್ಯ ಭಾಗವಾಗಿದೆ. ಹನ್ನೆರಡು ಅಥವಾ ಹದಿಮೂರು ವರ್ಷ ವಯಸ್ಸಿನ ಮಗುವು ಮಹಿಳಾ ಹಕ್ಕುಗಳನ್ನು ಹೇಗೆ ನೋಡುತ್ತದೆ ಎಂಬುದಕ್ಕೆ ಇನ್ನೊಂದು ಉತ್ತಮ ಉದಾಹರಣೆ.

ಈ ಕೆಲವು ಅಭಿಪ್ರಾಯಗಳು ಮಕ್ಕಳ ಸನ್ನಿವೇಶದಿಂದ ಬಂದವಾದರೆ ಇನ್ನು ಕೆಲವು ಅವರ ಅನುಭವಗಳಿಂದ, ಮತ್ತೆ ಕೆಲವು ಸಮಾಜ ವಿಜ್ಞಾನದ ಕಲಿಕೆಯಿಂದ ಬಂದವಾಗಿವೆ.

---

**ಪ್ರಕಾಶ್** ಅವರು ಫೆಬ್ರುವರಿ 2012 ರಿಂದ ಧಮ್ತಾರಿಯ ಅಜೀಮ್ ಪ್ರೇಮ್ ಜಿ ಶಾಲೆಯಲ್ಲಿ ಬೋಧಿಸುತ್ತಿದ್ದಾರೆ. ಇದಕ್ಕೂ ಮೊದಲು ಅವರು ಮಧ್ಯಪ್ರದೇಶ ಮತ್ತು ಮತ್ತು ಛತ್ತೀಸ್ಗಡದ ಬುಡಕಟ್ಟು, ಗ್ರಾಮೀಣ ಮತ್ತು ನಗರ ವ್ಯವಸ್ಥೆಗಳಲ್ಲಿ ಹದಿನಾರು ವರ್ಷಗಳ ಕಾಲ ಶಾಲಾ ಶಿಕ್ಷಕರಾಗಿದ್ದರು. ಅವರು ಒಂದರಿಂದ ಹನ್ನೆರಡನೇ ತರಗತಿಯ ಮಕ್ಕಳೊಂದಿಗೆ ಕೆಲಸ ಮಾಡಿದ್ದಾರೆ. ಇಂಗ್ಲಿಷ್, ಇತಿಹಾಸ ಮತ್ತು ಜೀವಶಾಸ್ತ್ರ ಅವರು ಕಲಿಸುವ ವಿಷಯಗಳಾಗಿವೆ. ಛತ್ತೀಸ್ಗಡದ ಆಕಾಶವಾಣಿ, AIR ರಾಯಪುರದಲ್ಲಿ ಕ್ಯಾಶುಯಲ್ ಅನೌನ್ಸರ್ ಆಗಿಯೂ ಕೆಲಸ ಮಾಡಿದ್ದಾರೆ. ಅವರನ್ನು prakash.gautam@azimpremjifoundation.org ಇಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.